## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 174 |
| ಸದಸ್ಯರ ಹೆಸರು | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 01-02-2021 |
| ಉತ್ತರಿಸಬೇಕಾದ ಸಚಿವರು | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಪ್ರಶ್ನೆ | ಉತ್ತರ |
|---|---|
| **ಅ)** ಕೇಂದ್ರ ಸರ್ಕಾರ ಘೋಷಣೆ ಮಾಡಿರುವ ಶಿಕ್ಷಣಕ್ಕೆ ಸಂಬಂಧಿಸಿದ ರಾಷ್ಟ್ರೀಯ ಶಿಕ್ಷಣ ನೀತಿಯನ್ನು ರಾಜ್ಯ ಸರ್ಕಾರದ ವತಿಯಿಂದ ಜಾರಿಗೆ ತರಲಾಗಿದೆಯೇ; | ಜಾರಿಗೆ ತರಲು ಸಿದ್ದತೆಗಳನ್ನು ಮಾಡಿಕೊಳ್ಳಲಾಗುತ್ತಿದೆ. |
| **ಆ)** ದೇಶದ ಶಿಕ್ಷಣ ವ್ಯವಸ್ಥೆಯನ್ನು ಬದಲಿಸುವ ಈ ಯೋಜನೆಯನ್ನು ಸರ್ಕಾರ ಯಾವ ರೀತಿಯಲ್ಲಿ ಅನುಷ್ಠಾನಗೊಳಿಸಲು ಉದ್ದೇಶಿಸಿದೆ; | • ಶಿಕ್ಷಣ ಮಂತ್ರಾಲಯ, ಭಾರತ ಸರ್ಕಾರ, ಇವರಿಂದ ನೀಡಿರುವ ರಾಷ್ಟ್ರೀಯ ಶಿಕ್ಷಣ ನೀತಿ 2020ರ ಕಾಲಸೂಚಿಯಂತೆ ಅನುಷ್ಠಾನ ಕ್ರಮಗಳನ್ನು ಕೈಗೊಳ್ಳಲು ರಾಜ್ಯ ಸರ್ಕಾರ ಹಾಗೂ ಇಲಾಖೆಯು ಕಾರ್ಯ ಪ್ರವೃತ್ತವಾಗಿದೆ.<br>• ಸರ್ಕಾರದ ಹಂತದಲ್ಲಿ ಶ್ರೀ.ಎಸ್.ವಿ.ರಂಗನಾಥ್ ಭಾ.ಆ.ಸೇ, ನಿವೃತ್ತ ಸರ್ಕಾರದ ಮುಖ್ಯ ಕಾರ್ಯದರ್ಶಿ ಇವರ ನೇತೃತ್ವದಲ್ಲಿ ಎನ್.ಇ.ಪಿ-2020ರ ಸಮರ್ಪಕ ಅನುಷ್ಠಾನಕ್ಕಾಗಿ ಒಂದು ಕಾರ್ಯಪಡೆಯನ್ನು ರಚಿಸಲಾಗಿದೆ. ಸದರಿ ಕಾರ್ಯಪಡೆಯು ಸರ್ಕಾರಕ್ಕೆ ಕರ್ನಾಟಕದಲ್ಲಿ ಎನ್.ಇ.ಪಿ-2020ನ್ನು ಅನುಷ್ಠಾನಗೊಳಿಸುವ ಕುರಿತು ಒಂದು ವರದಿಯನ್ನು ಸಲ್ಲಿಸಿರುತ್ತದೆ. ವರದಿಯ ಶಿಫಾರಸ್ಸುಗಳಂತೆ ಸರ್ಕಾರವು ಹಾಗೂ ಇಲಾಖೆ ಕಾರ್ಯಪ್ರವೃತ್ತವಾಗಿದೆ.<br>• ಶಿಕ್ಷಣ ನೀತಿಯ ಅನುಷ್ಠಾನ ಚೌಕಟ್ಟಿನ ರೂಪುರೇಷೆಯನ್ನು ವಿನ್ಯಾಸಗೊಳಿಸಲು ಕೋರ್ ಸಮಿತಿಯನ್ನು ರಚಿಸಲಾಗಿದ್ದು, ಕೋರ್ ಸಮಿತಿಯು ರಾಷ್ಟ್ರೀಯ ಶಿಕ್ಷಣ ನೀತಿ 2020ರ ಸಮಗ್ರ ದೃಷ್ಟಿಕೋನವನ್ನು ಅರ್ಥ ಮಾಡಿಕೊಳ್ಳಲು ಮತ್ತು ರಾಜ್ಯದಲ್ಲಿ ಈ ನೀತಿಯ ಯಶಸ್ವಿ ಅನುಷ್ಠಾನಕ್ಕೆ ಪರಿಣಾಮಕಾರಿಯಾದ ವಿಧಾನಗಳನ್ನು ಅನ್ವೇಷಿಸಲು ಸಮಗ್ರವಾದ ಸಂವಾದಗಳನ್ನು ಕೈಗೊಂಡಿದೆ.<br>• ಕೋರ್ ಸಮಿತಿಯ ನೇತೃತ್ವದಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿ 2020ರಲ್ಲಿನ ವಿವಿಧ ಅಧ್ಯಾಯಗಳ ಆಧಾರದ ಮೇಲೆ ಉಪಸಮಿತಿಗಳನ್ನು ರಚಿಸಿ ವಿವರವಾದ ಚರ್ಚೆಗಳನ್ನು ನಡೆಸಿ ಕರ್ನಾಟಕದ ಪ್ರಸ್ತುತ ಶಾಲಾ ಶಿಕ್ಷಣದ ಶೈಕ್ಷಣಿಕ ಪರಿಸ್ಥಿತಿಯನ್ನು ಪರಿಶೀಲಿಸಿ ಮತ್ತು ಗಮನಹರಿಸಬೇಕಾದ ಪ್ರಮುಖ ಕ್ಷೇತ್ರಗಳನ್ನು ಗುರ್ತಿಸಿ ಪರಿಣಾಮಕಾರಿ |

| | |
|---|---|
| | ಅನುಷ್ಠಾನಕ್ಕಾಗಿ ಸೂಕ್ತ ಸಮಯ ಸೂಚಿಯೊಂದಿಗೆ ಕೈಗೊಳ್ಳಬೇಕಾದ ಪ್ರಮುಖ ಕ್ರಮಗಳು ಪರಿಶೀಲನೆಯಲ್ಲಿದೆ<br>• 2020 ಸೆಪ್ಟೆಂಬರ್ 1 ರಿಂದ 25ರವರೆಗೆ ಶಿಕ್ಷಣ ಕ್ಷೇತ್ರದ ಎಲ್ಲಾ ಭಾಗಿದಾರರೊಡನೆ ವೆಬಿನಾರ್ ಮೂಲಕ ಸಮಾಲೋಚನಾ ಸಭೆಗಳನ್ನು ಆಯೋಜಿಸಲಾಗಿತ್ತು. ಸದರಿ ಸಭೆಗಳಲ್ಲಿ ಸಂಗ್ರಹಿಸಿದ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಅನುಷ್ಠಾನ ಚೌಕಟ್ಟಿನ ರೂಪುರೇಷೆಗಳನ್ನು ವಿನ್ಯಾಸಗೊಳಿಸುವ ಸಂದರ್ಭದಲ್ಲಿ ಅಳವಡಿಸಿಕೊಳ್ಳಲಾಗುವುದು.<br>ರಾಷ್ಟ್ರೀಯ ಶಿಕ್ಷಣ ನೀತಿ 2020ರ ಸಂಬಂಧ ಶಿಕ್ಷಣ ಮಂತ್ರಾಲಯ, ಭಾರತ ಸರ್ಕಾರ, ಇವರು ನೀಡಿರುವ Task points ಗಳನ್ನು 2020 ರಿಂದ 2030 ರ ವರೆಗಿನ ಕಾಲಸೂಚಿಯಲ್ಲಿ ಅನುಷ್ಠಾನ ಮಾಡಲು ಕ್ರಮ ಕೈಗೊಂಡಿದೆ. |
| **ಇ)** ಸದರಿ ಯೋಜನೆಯು ಪ್ರಾಥಮಿಕ ಶಿಕ್ಷಣ ಮತ್ತು ಗ್ರಾಮೀಣ ಮತ್ತು ನಗರ ಭಾಗಗಳಲ್ಲಿ ವೃತ್ತಿಪರ ಶಿಕ್ಷಣಕ್ಕೆ ಅನುಕೂಲ ಮಾಡಿಕೊಡಲಿದ್ದು; ಇದನ್ನು ಜಾರಿಗೆ ತರುವ ಬಗ್ಗೆ ಸರ್ಕಾರ ಯಾವ ರೀತಿ ರೂಪುರೇಷೆಗಳನ್ನು ಹಾಕಿಕೊಂಡಿದೆ; | ರಾಷ್ಟ್ರೀಯ ಶಿಕ್ಷಣ ನೀತಿಯ ಅನ್ವಯ 6ನೇ ತರಗತಿಯಿಂದಲೇ ವಿದ್ಯಾರ್ಥಿಗಳಿಗೆ ವೃತ್ತಿ ಶಿಕ್ಷಣವನ್ನು ಕಲಿಸುವ ಉದ್ದೇಶದಿಂದ ವೃತ್ತಿಪೂರ್ವ ಶಿಕ್ಷಣವನ್ನು ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಉಲ್ಲೇಖಿಸಿದೆ. ಇದರ ಅನ್ವಯ 6ರಿಂದ 12ನೇ ತರಗತಿಯವರೆವಿಗೂ ವೃತ್ತಿಪೂರ್ವ ಶಿಕ್ಷಣವನ್ನು ಶಾಲಾ ಶಿಕ್ಷಣದಲ್ಲಿ ವಿಲೀನಗೊಳಿಸಬೇಕಾಗಿರುತ್ತದೆ. ಸದರಿ ಕಾರ್ಯವನ್ನು ಇಲಾಖೆಯು ಪಠ್ಯಕ್ರಮ ಚೌಕಟ್ಟನ್ನು ತಯಾರಿಸುವ ಸಂದರ್ಭದಲ್ಲಿ ಅಳವಡಿಸಿಕೊಳ್ಳಲಾಗುವುದು.ಈ ಹಿನ್ನಲೆಯಲ್ಲಿ ವೃತ್ತಿಪೂರ್ವ ಶಿಕ್ಷಣಕ್ಕೆ ಸಂಬಂಧಿಸಿದ ಮಾಹಿತಿಯನ್ನು ಹಾಗೂ ಈ ಸಂಬಂಧ ಜಿಲ್ಲಾ ಮಟ್ಟದಲ್ಲಿನ ಸ್ಥಳೀಯ ಕೌಶಲ್ಯಗಳ ಮ್ಯಾಪಿಂಗ್ ಕಾರ್ಯವನ್ನು ನೆರವೇರಿಸಲಾಗುತ್ತಿದೆ. |
| **ಈ)** ಕೇಂದ್ರ ಸರ್ಕಾರದ ಹೊಸ ಶಿಕ್ಷಣ ನೀತಿಯಲ್ಲಿ ಮಾತೃ ಭಾಷೆಗೆ ಹೆಚ್ಚು ಮಹತ್ವ ಕೊಡಲು ನಿರ್ದೇಶಿಸಲಾಗಿದ್ದು, ಸರ್ಕಾರ ಇದನ್ನು ಯಾವ ರೀತಿಯಲ್ಲಿ ಅನುಷ್ಠಾನಗೊಳಿಸಲಿದೆ ? | ಹೊಸ ಶಿಕ್ಷಣ ನೀತಿಯಲ್ಲಿ ಮಾತೃ ಭಾಷೆಗೆ ಹೆಚ್ಚು ಮಹತ್ವ ನೀಡಿದೆ. ರಾಜ್ಯ ಸರ್ಕಾರವು ಹಿಂದಿನಿಂದಲೂ ತ್ರಿಭಾಷಾ ಸೂತ್ರವನ್ನು ಪಾಲಿಸುತ್ತಿದ್ದು ಇದರಲ್ಲಿ ಮಾತೃ ಭಾಷೆಗೆ ಪ್ರಥಮ ಆದ್ಯತೆಯನ್ನು ನೀಡಿದೆ. ಅದರಂತೆ ವಿದ್ಯಾರ್ಥಿಗಳು ಮಾತೃ ಭಾಷೆಯನ್ನು ಪ್ರಥಮ ಭಾಷೆಯನ್ನಾಗಿ ವ್ಯಾಸಂಗ ಮಾಡುತ್ತಿದ್ದು, ಮಾತೃ ಭಾಷೆಯನ್ನೇ ಬೋಧನಾ ಮಾಧ್ಯಮವಾಗಿಯೂ ಬಳಸಲಾಗುತ್ತಿದೆ. |

**ಇಪಿ 26 ಪಿಜಿಸಿ 2021**

S. S-

**[ ಎಸ್.ಸುರೇಶ್ ಕುಮಾರ್]**
**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ**
**ಸಕಾಲ ಸಚಿವರು.**